## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 304

ಸದಸ್ಯರ ಹೆಸರು : ಶ್ರೀ. ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 15.12.2021.

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಯುದ್ಧದಲ್ಲಿ ಹುತಾತ್ಮ ಯೋಧ ಶ್ರೀ ಸೋಮೇಗೌಡ, ಚನ್ನಪಟ್ಟಣ, ರಾಮನಗರ ಜಿಲ್ಲೆರವರ ಕುಟುಂಬದವರಿಗೆ ಜಮೀನು ಮಂಜೂರು ಮಾಡಲು ಅರ್ಜಿ ಸಲ್ಲಿಸಿದ್ದರೂ ಇದುವರವಿಗೂ ಜಮೀನು ಮಂಜೂರು ಮಾಡದಿರಲು ಕಾರಣಗಳೇನು; | ಹುತಾತ್ಮ ಯೋಧರ ಪತ್ನಿಯವರು ಸಲ್ಲಿಸಿದ್ದ ಮನವಿಯಂತೆ ಮಂಜೂರು ಮಾಡಲು ಭೂ ಲಭ್ಯತಾ ಪಟ್ಟಿಯಂತೆ ಚನ್ನಪಟ್ಟಣ ಮತ್ತು ಕನಕಪುರ ತಾಲ್ಲೂಕು ವ್ಯಾಪ್ತಿಯಲ್ಲಿ ಸರ್ಕಾರಿ ಜಮೀನು ಲಭ್ಯವಿಲ್ಲದ ಕಾರಣ ಅರ್ಜಿದಾರರಿಗೆ ಜಮೀನು ಲಭ್ಯವಿಲ್ಲವೆಂದು ತಿಳಿಸಲಾಗಿದೆ. |
| ಆ) | ದೇಶಕ್ಕಾಗಿ ಪ್ರಾಣ ತೆತ್ತ ಯೋಧನ ಕುಟುಂಬಕ್ಕೆ ಸರ್ಕಾರದಿಂದ ಜಮೀನು ಮಂಜೂರು ಮಾಡಲು ಲೋಕಾಯುಕ್ತ ರವರು ಶಿಫಾರಸ್ಸು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; ಕ್ರಮ ಕೈಗೊಳ್ಳದಿದ್ದಲ್ಲಿ ಇದಕ್ಕೆ ಕಾರಣವಾದ ತಾಲ್ಲೂಕು ಆಡಳಿತ ಅಧಿಕಾರಿ/ನೌಕರರ ವಿರುದ್ಧ ಕೈಗೊಳ್ಳಲಾದ ಕ್ರಮಗಳೇನು; | ಭೂ ಮಂಜೂರಿಗೆ ಸರ್ಕಾರಿ ಜಮೀನು ಲಭ್ಯವಿಲ್ಲವೆಂದು ಹಿಂಬರಹದ ಮೂಲಕ ಅರ್ಜಿದಾರರಿಗೆ ತಿಳಿಸಿರುವುದರಿಂದ ಅಧಿಕಾರಿ/ನೌಕರರ ವಿರುದ್ಧ ಕ್ರಮಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ಸದರಿ ಯೋಧನಿಗೆ ಜಮೀನನ್ನು ಯಾವಾಗ ಎಲ್ಲಿ ಮಂಜೂರು ಮಾಡಲಾಗುವುದು ಎಂಬ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವೇನು; | ಮಾನ್ಯ ಲೋಕಾಯುಕ್ತರವರು ಈ ಸಂಬಂಧ ಶಿಫಾರಸ್ಸು ಮಾಡಿರುವಂತೆ, ಚನ್ನಪಟ್ಟಣ ಮತ್ತು ಕನಕಪುರ ತಾಲ್ಲೂಕು, ವ್ಯಾಪ್ತಿಯಲ್ಲಿ ಭೂ ಲಭ್ಯತಾ ಪಟ್ಟಿಯಂತೆ ಸರ್ಕಾರಿ ಜಮೀನು ಲಭ್ಯವಿಲ್ಲವಾದ್ದರಿಂದ ಮಾಗಡಿ ಮತ್ತು ರಾಮನಗರ ತಾಲ್ಲೂಕು ವ್ಯಾಪ್ತಿಯಲ್ಲಿ ಸರ್ಕಾರಿ ಜಮೀನು ಲಭ್ಯವಿರುವ ಬಗ್ಗೆ ಪರಿಶೀಲಿಸಿ ಜಮೀನು ಲಭ್ಯವಿದ್ದಲ್ಲಿ, ಮಂಜೂರಿಗೆ ನಿಯಮಾನುಸಾರ ಕ್ರಮ ಕೈಗೊಳ್ಳಲು ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 26 ಎಲ್‌ಜಿಪಿ 2021; ದಿನಾಂಕ: 27.10.2021 ರಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969 ರ ನಿಯಮ 8 ಕ್ಕೆ ತಿದ್ದುಪಡಿ ತರಲಾಗಿರುವಂತೆ ಜಮೀನು ಲಭ್ಯವಿಲ್ಲದಿದಲ್ಲಿ ನಿವೇಶನವನ್ನು ನೀಡಲು ನಿಯಮಾನುಸಾರ ಕ್ರಮ ಕೈಗೊಳ್ಳಲು ಜಿಲ್ಲಾಧಿಕಾರಿಗಳಿಗೆ ಅವಕಾಶ ಕಲ್ಪಿಸಲಾಗಿದೆ. |
| ಉ) | ಈ ಯೋಧನ ಕುಟುಂಬಕ್ಕೆ ಸರ್ಕಾರ ಸ್ಪಂಧಿಸುವುದೇ? (ಈ ಕುರಿತು ಸ್ಪಷ್ಟವಾದ ಮಾಹಿತಿಯನ್ನು ಒದಗಿಸುವುದು) | |

ಸಂಖ್ಯೆ: ಆರ್‌ಡಿ 226 ಎಲ್‌ಜಿಕ್ಯೂ 2021 (ಇ)

(ಆರ್. ಅಶೋಕ)

ಕಂದಾಯ ಸಚಿವರು.